# ಬನವಾಸಿಯಲ್ಲಿ ದೊರೆತ ಕೆಲವು ರೋಮನ್ ಅವಶೇಷಗಳು : ಒಂದು ಟಿಪ್ಪಣಿ

ಡಾ|| ಎಚ್. ಆರ್. ರಘುನಾಥ ಭಟ್

ಉತ್ತರಕನ್ನಡ ಜಿಲ್ಲೆಯ ಶಿರಸಿ ತಾಲೂಕಿನ ಬನವಾಸಿಯಲ್ಲಿ ಈವರೆಗೆ ಹಲವು ಪ್ರಾಚ್ಯಾವಶೇಷಗಳು ದೊರೆತಿವೆ. ಅವುಗಳಲ್ಲಿ ಕೆಲವು ರೋಮನ್ ಅವಶೇಷಗಳು ಕುತೂಹಲಕಾರಿಯಾಗಿವೆ. ರೋಮನ್ ಮಡಕೆ, ರೋಮನ್ ನಾಣ್ಯ-ಪದಕದ ಕಲ್ಲಚ್ಚು, ಮಣಿಗಳು, 'ಕ್ಯಾಮಿಯೊ' ಮುಂತಾದವುಗಳನ್ನಿಲ್ಲಿ ವಿಶೇಷವಾಗಿ ಹೆಸರಿಸಬೇಕು.

ಬನವಾಸಿ ಶೋಧನೆಯ ಇತಿಹಾಸದಲ್ಲಿ ೧೯೭೦–೭೧ರಲ್ಲಿ ಆರಂಭಿಸಿದ ಬನವಾಸಿ-ಉತ್ಖನನ ಒಂದು ಮಹತ್ವೂರ್ಣ ಘಟ್ಟವಾಗಿದೆ. ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗವು ರಾಜ್ಯ ಸರ್ಕಾರದ ಪ್ರಾಚ್ಯವಸ್ತು ಮತ್ತು ವಸ್ತು ಸಂಗ್ರಹಾಲಯಗಳ ಇಲಾಖೆಯ ಸಹಭಾಗಿತ್ವದಲ್ಲಿ ಪರಿಣತ ಪುರಾತತ್ವಜ್ಞರಾಗಿದ್ದ ಪ್ರೊ|| ಎಂ. ಶೇಷಾದ್ರಿಯವರ ನಿರ್ದೇಶಕತ್ವದಲ್ಲಿ ನಡೆಸಿದ ಉತ್ಖನನಗಳಲ್ಲಿ (ಬಿಎನ್‌ವಿ-II ನಿವೇಶನದ ಐದು ಮತ್ತು ಆರನೆಯ ಪದರಗಳಲ್ಲಿ ಹಾಗೂ ಬಿಎನ್‌ವಿ-VIನೆಯ ನಿವೇಶನದಲ್ಲಿ) ರಸೆಟ್ ಕೋಟೆಡ್ ಕೆಯೊಲಿನ್ ಪೆಂಟೆಡ್ ಮಡಕೆ ಮತ್ತು ರೋಮನ್ ಅನುಕರಣೆಯ ರೌಲೆಟೆಡ್ ಮಡಕೆ ಚೂರುಗಳು ಪತ್ತೆಯಾದವು. ಶಾತವಾಹನರ ನೆಲೆಯಲ್ಲಿ ಈ ಬಗೆಯ ಮಡಕೆ ಕುಡಿಕೆಗಳು ಪತ್ತೆಯಾಗಿರುವುದು ಮಹತ್ವೂರ್ಣವಾದುದೆಂದು ತಿಳಿಯಲಾಗಿದೆ.

೧೯೭೫-೭೬ರ ಸುಮಾರಿಗೆ ಬನವಾಸಿ ಕೋಟೆಯ ಹೊರವಲಯದಲ್ಲಿ ರೋಮನ್ ನಾಣ್ಯ-ಪದಕದ ಕಲ್ಲಚ್ಚೊಂದು ಅಕಸ್ಮಾತ್ತಾಗಿ ಸಿಕ್ಕಿತ್ತು. ಇದನ್ನು ಮ.ಚ. ವಡೆಯರು ಸಂಗ್ರಹಿಸಿದರು. ಆಗಲೇ ಅದನ್ನು ಪರೀಕ್ಷಿಸಿ ಅದರ ಪಡಿಯಚ್ಚನ್ನ ಛಾಯಾಚಿತ್ರವನ್ನು ತೆಗೆದು ಅಭ್ಯಾಸ ಮಾಡಿ ಪ್ರಕಟಿಸಿದೆನು.[2] ಅನಂತರ ಡಾ|| ಎ. ವಿ. ನರಸಿಂಹಮೂರ್ತಿಯವರು ಅದನ್ನು ನಾಣ್ಯದಚ್ಚೆಂದು ಭಾವಿಸಿ ಲೇಖನವನ್ನು ಪ್ರಕಟಿಸಿದರು. ಇದನ್ನು ಸ್ಥಳೀಯವಾಗಿ ತಯಾರಿಸಿದರೋ ರೋಮ್ ದೇಶದಿಂದ ಆಮದು ಮಾಡಿಕೊಂಡರೋ ತಿಳಿಯದೆಂದು ಹೇಳಿದರು.[3] ಅದರ ಪುನರಾವಲೋಕನದಿಂದ ಅದು ಸ್ಥಳೀಯವಾಗಿ ತಯಾರಿಸಿರಬಹುದಾದ ಕಲ್ಲಚ್ಚು ; ಮೂಲ ರೋಮನ್ ನಾಣ್ಯದ ಚಿತ್ರವನ್ನು ಇದರಲ್ಲಿ ಅನುಕರಿಸಲಾಗಿದೆ ಎಂಬುದು ಸ್ಪಷ್ಟವಾಯಿತು. ರೋಮನ್ ಸಾಮ್ರಾಟ ಟೈಬೀರಿಯಸ್‌ನ ನಾಣ್ಯದ ಓಮ್ಮುಖದಲ್ಲಿ ಕಂಡುಬರುವ ಚಿತ್ರ-ಬರಹಗಳನ್ನೂ ಆದಷ್ಟೂ ಪ್ರಾಮಾಣಿಕವಾಗಿ ಅನುಕರಿಸಲಾಗಿದೆ. ಮೂಲ ರೋಮನ್ ನಾಣ್ಯದ ಚಿತ್ರ-ಬರಹಗಳೊಡನೆ

1 ಪುರಾತತ್ವ, ಸಂ. ೪, ೧೯೭೦-೭೧, ಪು. ೫೬-೫೭

2 ಕರ್ನಾಟಕ ಶಾಸನ ಕಲೆ, ಮೈಸೂರು, ೧೯೭೭, ಪು. ೧೩೦

3 ಎ.ವಿ. ನರಸಿಂಹಮೂರ್ತಿ, ಬಿ.ಕೆ. ಗುರುರಾಜರಾವ್ (ಸಂ) ; ರಂಗವಲ್ಲಿ, ನವದೆಹಲಿ, ೧೯೮೪, ಪು. ೧೪೬-೭

ಇದನ್ನು ಹೋಲಿಸಿದರೆ ಇದು ಇನ್ನೂ ಸ್ಪಷ್ಟವಾಗುತ್ತದೆ. ಸ್ತ್ರೀ ದೇವತೆ ಎತ್ತರವಾದ ಸ್ಟೂಲಿನ ಮೇಲೆ ಕುಳಿತಿದ್ದಾಳೆ. ಎತ್ತಿದ ಬಲಗೈಯಲ್ಲಿ ಉದ್ದನೆಯ ದಂಡ ಹಿಡಿದಿದ್ದಾಳೆ. ಎಡಗೈಯಲ್ಲಿ ಗಿಡದ ಟೊಂಗೆಯನ್ನು ಹಿಡಿದುಕೊಂಡಿದ್ದಾಳೆ. ಈ ಚಿತ್ರದ ಬಲಭಾಗದಲ್ಲಿ, ಪುಟ್ಟ ಮಣಿಚುಕ್ಕೆಗಳಿಂದುಂಟಾದ ವೃತ್ತದಲ್ಲಿ ನಾಣ್ಯ ಬರಹವಿದೆ, (Maxim Pontif) ಇವಿಷ್ಟನ್ನೂ ಒಳ್ಳೆಯ ಬಳಪದ ಮೃದು ಕಲ್ಲಿನಲ್ಲಿ ಸೂಕ್ಷ್ಮವಾಗಿ ಕೆತ್ತಲಾಗಿದೆ. ಈ ನಾಣ್ಯ ಪದಕಕ್ಕೆ ತೊಟ್ಟು ಇಡಲು ಅನುಕೂಲವಾಗುವಂತೆ ತುದಿಯಲ್ಲಿ ಪುಟ್ಟ ಕೊಳವೆಯನ್ನು ಅಚ್ಚಿಸಲಾಗಿದೆ. ಇದರಿಂದ ದಾರ ಪೋಣಿಸಲು ಅನುಕೂಲವಾಗುತ್ತದೆ.

ಶಾತವಾಹನರ ನೆಲೆಯಲ್ಲಿ ಈ ಬಗೆಯ ನಾಣ್ಯದ ಪಡಿಯಚ್ಚು ಸಾಮಾನ್ಯವಾಗಿ ಸಿಗುತ್ತಿರುತ್ತದೆ. ಕೆಲವೊಮ್ಮೆ ಮೂಲ ರೋಮನ್ ನಾಣ್ಯಗಳ ಜೊತೆ ಜೊತೆಯಲ್ಲೇ ಸಿಕ್ಕಿದ್ದುಂಟು. ಈ ರೀತಿಯ ನಾಣ್ಯಗಳಿಂದ ತಯಾರಿಸಿದ ಕಂಠಹಾರ ಅಥವಾ 'ಪವನ್‌ಸರ' ಹಿಂದಿದ್ದಂತೆ ಇಂದಿಗೂ ಜನಪ್ರಿಯ ಹಾಗೂ ಪ್ರತಿಷ್ಠಿತ ಆಭರಣವಾಗಿದೆ. ಜೈನ ಕಲ್ಪಸೂತ್ರದಲ್ಲಿ 'ಉರಸ್ಥ ದಿನಾರ ಮಾಲೆ'ಯೆಂದೇ ಕರೆಯಲಾಗಿದೆ.[4] ಅಂದರೆ ಇದು ರೋಮನ್ ದಿನಾರುಗಳಿಂದ ತಯಾರಾದ ಸರವೆಂಬುದು ಸ್ಪಷ್ಟವಾಗುವುದು. ಮೊದಮೊದಲು ಮೂಲ ರೋಮನ್ ದಿನಾರ್‌ಗಳನ್ನೇ ಬಳಸಿ ಕಂಠಹಾರವನ್ನು ತಯಾರಿಸುತ್ತಿದ್ದಿರಬೇಕು. ಕಾಲಾಂತರದಲ್ಲಿ ಆ ಬಗೆಯ ಅನುಕರಣೆಯ ಸರವನ್ನೂ ದಿನಾರಮಾಲೆಯೆಂದು ಕರೆಯುವುದು ರೂಢಿಯಾಗಿ ಹೋಯಿತು. ರೋಮನ್ ನಾಣ್ಯಗಳ ಸರವಷ್ಟೇ ಅಲ್ಲ, ಅವುಗಳ ಅನುಕರಣೆಯನ್ನು ಮಾಡಿ ಸರ ತಯಾರಿಸುತ್ತಿದ್ದರೆಂದೂ ಇದರಿಂದ ಗೊತ್ತಾಗುತ್ತದೆ. ಇದಕ್ಕೆ ಕಾರಣವೇನು ?

ಮೂಲತಃ ಚಿನ್ನದ ರೋಮನ್ ನಾಣ್ಯಗಳ ಬಗೆಗಿನ ಮೋಹ ಅಥವಾ ಆಕರ್ಷಣೆ ನಮ್ಮಲ್ಲಿ ವಿಶೇಷವಾಗಿತ್ತು. ಆದರಿಂದಾಗಿ ಬೆಳೆದು ಬಂದ ಬೇಡಿಕೆ ವಿಶೇಷವಾಗಿದ್ದಿರಬೇಕು. ಹೀಗಾಗಿ ಹಲವೆಡೆ ಸ್ಥಳೀಯ ಸೊನಗಾರರು ತಮ್ಮ ಮನೆಗಳಲ್ಲೇ ರೋಮನ್ ನಾಣ್ಯಗಳನ್ನು ಅನುಕರಿಸಿ ಅಚ್ಚುಗಳನ್ನು ತಯಾರಿಸಿಕೊಳ್ಳುತ್ತಿದ್ದಿರಬೇಕು. ಬನವಾಸಿಯಲ್ಲಿ ಪತ್ತೆಯಾದ ನಾಣ್ಯ ಪದಕದ ಕಲ್ಲಚ್ಚು ಇಂಥ ಒಂದು ನಿದರ್ಶನವಾಗಿದೆ. ಇಷ್ಟಾಗಿಯೂ ಇವುಗಳು ತಮ್ಮ ಐತಿಹಾಸಿಕಮಹತ್ವವನ್ನು ಕಳೆದುಕೊಂಡಿಲ್ಲ. ಅನುಕರಣೆಯ ಹಂತದಲ್ಲಿ ಮೂಲ ರೋಮನ್ ನಾಣ್ಯಗಳ ಪರಿಚಯ ಇರಬೇಕಲ್ಲ ? ಬನವಾಸಿ ಪ್ರದೇಶದಲ್ಲಿ ಪ್ರಾಚೀನ ಕಾಲದಲ್ಲಿ ರೋಮನ್ ನಾಣ್ಯಗಳು ಪರಿಚಿತವಾಗಿದ್ದಿರಬೇಕು. ಈ ಹಿನ್ನೆಲೆಯಲ್ಲಿ ಬನವಾಸಿಯಿಂದ ತೀರ ದೂರವಿಲ್ಲದ ಅಕ್ಕಿ ಆಲೂರಲ್ಲಿ ಅಗಸ್ಟಸ್ ಮತ್ತು ಟೈಬಿರಿಯಸ್ ಸಾಮ್ರಾಟರ ನಾಣ್ಯಗಳಲ್ಲದೆ, ಅವರ ನಂತರದ ಅಂಟೊನಿಯಸ್ ಪಯಸ್ (೧೩೮-೬೧), ಥಿಯೊಡೊಸಿಯಸ್ (೪೦೮-೪೫೦), ಮೆಸಿಯನ್ (೪೫೦-೪೫೭), ಲಿಯೊ I (೪೫೭-೪೭೪), ಝೀನೊ (೪೭೪-೪೯೧), ಅನಾಸ್ತಸಿಯಸ್ (೪೯೧-೫೧೮), ಜಸ್ಟಿನಸ್ I (೫೧೮-೫೨೭) ಅರಸರ ಸುವರ್ಣ ನಾಣ್ಯಗಳೂ ಬೆಳಕಿಗೆ ಬಂದಿದ್ದು ಗಮನಾರ್ಹವಾಗಿವೆ.[5] ಅದಕ್ಕಿಂತ ಸ್ವಾರಸ್ಯಕರವಾಗಿ ಶಿರಸಿ ತಾಲೂಕಿನ ಹುಲೇಕಲ್ಲಿನಲ್ಲಿ ರೋಮನ್ ಚಕ್ರವರ್ತಿಗಳಾದ ಲಿಸಿಯಸ್, ಡೆಮಿಟ್ರಿಯಸ್, ಟೊಲೆಮಿ, ಅಗಥೆ ಕ್ಲೆಸ್‌ರ ನಾಣ್ಯಗಳು ಪತ್ತೆಯಾಗಿರುವುದು ವರದಿಯಾಗಿದೆ.[6] ವಡಗಾಂವ್ ಮಾಧವ ಪುರದಲ್ಲಿ (ಬೆಳಗಾಂವ್ ಜಿಲ್ಲೆ) ರೋಮನ್ ದಿನಾರಿಗಳು ಸಿಕ್ಕಿರುವುದೂ ಇಲ್ಲಿ ಸ್ಮರಣೀಯ.[7] ಬನವಾಸಿಯೊಡನೆ ಸಾಂಸ್ಕೃತಿಕ ಸಂಬಂಧವಿಟ್ಟುಕೊಂಡ ನಾಗಾರ್ಜುನಕೊಂಡದಲ್ಲಿರುವ ದಾನಶಾಸನಗಳಲ್ಲೂ ದಿನಾರಿ

---

4 ಕೆ. ಕೃಷ್ಣಮೂರ್ತಿ : ನಾಗಾರ್ಜುನಕೊಂಡ, ನವದೆಹಲಿ, ೧೯೭೭, ಪು ೮೦

5 ಎಂ.ಎಸ್. ನಾಗರಾಜರಾವ್ : ಪ್ರೊಗ್ರೆಸ್ ಆಫ್ ಆರ್ಕಿಯೊಲಜಿ ಇನ್ ಕರ್ನಾಟಕ, ಮೈಸೂರು, ೧೯೭೮ ; ಎಚ್ಚೆಸ್ಕೆ (ಸಂ) : ಅವಲೋಕನ, ಬೆಂಗಳೂರು, ೧೯೮೫, ಪು. ೫೬

6 ಎಆರ್‌ಇಎ., ೧೯೩೯-೪೦, ೧೯೪೨-೪೩

7 ಅವಲೋಕನ

ಗಳನ್ನು ಹೆಸರಿಸಲಾಗಿದೆ.[8] ಇದುವರೆಗೆ ನಮಗೆ ತಿಳಿದು ಬಂದಿರುವಂತೆ ದಖನಿನಲ್ಲಿ ದಿನಾರಿಗಳೇ ಹೆಚ್ಚಿನ ಸಂಖ್ಯೆಯಲ್ಲಿ ದೊರೆತಿವೆ.

ರೋಮನ್ 'ಕ್ಯಾಮಿಯೊ' (Cameo) ಎಂದು ಹೇಳಲಾದ ಬೆಲೆಯುಳ್ಳ ಹರಳುಕಲ್ಲಿನ ಅವಶೇಷ ತುಂಬ ಕುತೂಹಲಕಾರಿಯಾಗಿದೆ. ಕೋಟೆಯ ಒಳಭಾಗದಲ್ಲಿ (ಬಿಎನ್‌ವಿ VI ನೆಲೆಯ ಬಳಿ) ಮನೆಯ ಗೋಡೆ ಕಟ್ಟುವುದಕ್ಕಾಗಿ ಮಣ್ಣು ಅಗೆಯುತ್ತಿದ್ದಾಗ ಅಕಸ್ಮಾತ್ತಾಗಿ ಸಿಕ್ಕ ಈ ಅಮೂಲ್ಯ ವಸ್ತುವನ್ನು ಪರೀಕ್ಷಿಸಿ ಮೊದಲ ಬಾರಿಗೆ ಇಲ್ಲಿ ಟಿಪ್ಪಣಿಸಲಾಗಿದೆ. ಇದನ್ನು ಸಾಮಾನ್ಯವಾಗಿ ಇಂಟಾಗ್ಲಿಯೊ (Intaglio) ಎಂದು ಕರೆಯಲಾಗುತ್ತದೆ. ವಾಸ್ತವವಾಗಿ ಮತ್ತು ತಾಂತ್ರಿಕ ಪರಿಭಾಷೆಯಲ್ಲಿ ಇದನ್ನು 'ಕ್ಯಾಮಿಯೊ' (Cameo) ಎಂದೇ ಕರೆಯಬೇಕು. ಬಿಳಿ ಮತ್ತು ಕಂದು ಮಣ್ಣು ಬಣ್ಣವುಳ್ಳ ಎರಡು ಪದರುಗಳುಳ್ಳ ಹರಳುಕಲ್ಲಾಗಿದ್ದು (Semi Precious Stone) ಇದನ್ನು ಚಾಲ್ಸಿಡೊನಿಯ ಪ್ರಭೇದವಾದ ಅಗೇಟ್ ಅಥವಾ ಸಾರ್ಡೊನಿಕ್ಸ್ ಎಂದು ಕರೆಯುತ್ತಾರೆ. ಇದರ ಮೇಲ್ಪದರದಲ್ಲಿ ಉಬ್ಬುಶಿಲ್ಪವನ್ನು ಸೂಕ್ಷ್ಮವಾಗಿ ಕಂಡರಿಸಲಾಗಿದೆ. ಇದರ ಬಹುಭಾಗ ತಿಳಿ ಬಿಳಿ ಬಣ್ಣದಲ್ಲಿದೆ ; ಕೆಲ ಭಾಗ ಕಂದು ಬಣ್ಣದಲ್ಲಿದೆ. ಬೆಂಗಡೆ ನುಣುಪಾಗಿದೆ. ಅಂಡಾಕೃತಿಯಲ್ಲಿರುವ ಈ ಪುಟ್ಟ ಕಲಾಕೃತಿ ನೋಡಲು ತುಂಬ ಸೊಗಸಾಗಿದೆ. ರೋಮನ್ ಚಕ್ರವರ್ತಿ ಅಗಸ್ಟಸ್ ಈ ಬಗೆಯ ಕ್ಯಾಮಿಯೊವನ್ನು ಚಾಲ್ಸಿಡೊನಿಯಲ್ಲಿ ಕಂಡರಿಸಿದ್ದುಂಟು.

ಬನವಾಸಿ ಕ್ಯಾಮಿಯೋದ ಮೇಲೆ ರಾಜಗಾಂಭೀರ್ಯವುಳ್ಳ ರೋಮನ್ ಗಣ್ಯ ವ್ಯಕ್ತಿ ರೂಪಶಿಲ್ಪವು (Portraitute) ಸೂಕ್ಷ್ಮವಾಗಿ ಎದ್ದು ಕಾಣುತ್ತದೆ. ಬಲಕ್ಕೆ ಮುಖ ಮಾಡಿದ ಈ ಪ್ರಧಾನ ಪುರುಷನ ಶಿಲ್ಪವನ್ನು 'ಪ್ರೊಫೈಲ್' ಮಾದರಿಯಲ್ಲಿ ಕೆತ್ತಲಾಗಿದೆ. ಇದರ ವೇಷಭೂಷಣ, ನಿಲುವು ಭಂಗಿ ಸ್ವಾರಸ್ಯಕರವಾಗಿದೆ. ರೋಮನ್ 'ಗಾಲಾ' (ಪುಚ್ಛಗಳಿಂದ ಅಲಂಕೃತವಾದ ಟೊಪ್ಪಿ), ಅಲಂಕೃತ ಎದೆಪಟ್ಟಿ, ವಿಶಿಷ್ಟವಾದ ರೋಮನ್ ಶಿರೋಭಾಗ, ನೀಳಗರುಡಮೂಗು, ಚೂಪುಗದ್ದ, ಚುರುಕು ನೇತ್ರ ಮುಂತಾದವು ರೋಮನ್ ರಾಜಪುರುಷನ ಮೆರುಗನ್ನು ಹೆಚ್ಚಿಸುತ್ತವೆ. ಇವೆಲ್ಲ ಅಗಸ್ಟಸ್‌ನ ರೂಪಚಿತ್ರ ಕಲೆಯ ಕೆಲವು ಪ್ರಧಾನ ಲಕ್ಷಣಗಳೆನ್ನಬಹುದು. ಕ್ರಿಸ್ತಶಕಾರಂಭದ ಶತಕಗಳಲ್ಲಿ ಈ ಬಗೆಯ ಕಲಾತ್ಮಕ ಪೆಂಡೆಂಟ್‌ಗಳನ್ನು ಪ್ರಚಾರ ಮಾಧ್ಯಮವಾಗಿ ಅಗಸ್ಟಸ್ ದೊರೆ ಬಳಕೆಯಲ್ಲಿ ತಂದನೆಂದು ಹೇಳಲಾಗಿದೆ.

ಬನವಾಸಿಯ ಕ್ಯಾಮಿಯೊ ರೋಮನ್ ಸ್ಫುರದ್ರೂಪಿ ರಾಜಪುರುಷನ ಚಿತ್ರಸ್ವರೂಪದಲ್ಲಿ, ಶೈಲಿ ಮತ್ತು ತಂತ್ರಗಳಲ್ಲಿ, ಅಂದಚಂದದಲ್ಲಿ ವಿಶಿಷ್ಟ ಕಲಾಸೃಷ್ಟಿಯಾಗಿದೆ. ರೋಮನ್ ವ್ಯಕ್ತಿಚಿತ್ರಕಲೆ ಎಷ್ಟು ಸೊಗಸಾಗಿ ರೂಪುತಳೆಯಿತೆಂಬುದು ಇಂಥ ನಿದರ್ಶನಗಳಿಂದ ಮನದಟ್ಟಾಗುತ್ತದೆ. ಇದರಲ್ಲಿ ಮೂಡಿಬಂದ ವಾಸ್ತವಿಕತೆ, ನಿಖರತೆ, ಸೂಕ್ಷ್ಮತೆ ನಮ್ಮನ್ನು ಬೆರಗುಗೊಳಿಸುವಂಥದ್ದು. ಗ್ರೀಕ್ ಕಲೆಯ ಆದರ್ಶವಾದಿತ್ವ, ಸರಳೀಕೃತ ಸಾರ್ವತ್ರಿಕತೆಗಿಂತ ಭಿನ್ನವಾದ ಈ ರೋಮನ್ ಕಲೆಯಲ್ಲಿ ದೈಹಿಕ ಅಂಗಲಕ್ಷಣಗಳನ್ನು ತುಂಬ ಪ್ರಾಮಾಣಿಕವಾಗಿ, ಅದಷ್ಟೂ ಯಥಾವತ್ತಾಗಿ ಪಡಿಮೂಡಿಸಲಾಗಿದೆ. ಒಬ್ಬ ಬಲಿಷ್ಠ ಸೇನಾನಿಯ ಸ್ಫುರದ್ರೂಪ ಸೂಕ್ಷ್ಮ ತೀಕ್ಷ್ಣ ದೃಷ್ಟಿ, ಬಿಗಿ ಹಿಡಿದ ತುಟಿ, ನಿಖರವಾದ ಚೂಪುಗದ್ದ ಮುಂತಾದ ದೈಹಿಕ ಲಕ್ಷಣಗಳು ರೇಖಾಪ್ರಧಾನವಾಗಿ ಮೂಡಿಬಂದಿದೆ. ಇವುಗಳಿಂದಾಗಿ ಇದೊಂದು ಉತ್ತಮ ಕಿರುಕಲಾಕೃತಿಯೆನ್ನಿಸಿಕೊಳ್ಳುತ್ತದೆ.

ಬನವಾಸಿಯಲ್ಲೇ ಇನ್ನೂ ಹೆಚ್ಚಿನ ಅನ್ವೇಷಣೆ ನಡೆಸಿದಲ್ಲಿ ರೋಮನ್ ಅವಶೇಷಗಳು ಇನ್ನೂ ಸಿಗುವ ಸಾಧ್ಯತೆಯಿದೆ. ಇದರಿಂದ ಈ ಪ್ರದೇಶವು ರೋಮನ್ ಸಂಪರ್ಕಕ್ಕೆ ಒಳಗಾಗಿದ್ದರ ಬಗೆಗೆ ಹೆಚ್ಚಿನ ವಿವರಗಳು ಸಿಗುವವು. ಬನವಾಸಿಯು ರೋಮನ್ ಸಾಂಸ್ಕೃತಿಕ-ವಾಣಿಜ್ಯಕ ಸಂಬಂಧ-ಸಂಪರ್ಕಕ್ಕೊಳಗಾಗಿದ್ದಿರಬಹುದು; ಒಂದು ಕಾಲದಲ್ಲಿ ಈ ವ್ಯವಹಾರ ಚುರುಕಾಗಿದ್ದಿರಬಹುದು. ಕಾರಣ ಪ್ರಾಚೀನ ವ್ಯಾಪಾರಮಾರ್ಗದಲ್ಲಿ ಬನವಾಸಿ ಅಂತರ್ಗತವಾಗಿತ್ತು. ○

---

೮ ಪಿ.ಕೇ. ಹಿಮಾಂಶು : ಮೊನಾಸ್ಟರಿ ಎಂಡ್ ಗಿಲ್ಡ್, ದೆಹಲಿ, ೧೯೮೬, ಪು. ೧೪೬